# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ -19

5ನೇ ವರ್ಷ 9ನೇ ಸಂಚಿಕೆ ಕೊಪ್ಪ 19-10-1986 ಭಾನುವಾರ ಬೆಲೆ 20 ಪೈಸೆ




## ಭಯ, ಆತಂಕಗಳ ನಡುವೆ ನಡೆದ ರಥೋತ್ಸವ

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

**ಶೃಂಗೇರಿ : ಖಲಿಸ್ತಾನ್‌ವಾದಿ ಉಗ್ರಗಾಮಿಗಳಿಂದ ಬಾಂಬ್ ಬೆದರಿಕೆಯ ಭಯದ ವಾತಾವರಣದಲ್ಲಿ ನಡೆದ ಇಲ್ಲಿನ ನವರಾತ್ರಿಯ ಮುಕ್ತಾಯ ಸಮಾರಂಭವಾದ ರಥೋತ್ಸವವು ಬಿಗಿ ಪೋಲೀಸ್ ಬಂದೊಬಸ್ತಿನಲ್ಲಿ ಭಯ ಹಾಗು ಆತಂಕಗಳ ನಡುವೆ ನಡೆಯಿತು.**

ಸಾಂಪ್ರದಾಯಿಕವಾಗಿ ನಡೆದು ಬರುತ್ತಿದ್ದ ಗುರುಗಳ ಅಡ್ಡಪಲ್ಲಕ್ಕಿ ಉತ್ಸವವನ್ನು ರದ್ದುಪಡಿಸಿ ಇಬ್ಬರೂ ಗುರುಗಳು ಕಾಲು ನಡಿಗೆಯಲ್ಲಿಯೇ ಪಾಲ್ಗೊಂಡರು.

ಗುರುದ್ವಯರನ್ನು ಸಶಸ್ತ್ರ ಪೋಲೀಸರಲ್ಲದೆ ಭಕ್ತರನ್ನು ಬೇರ್ಪಡಿಸಿದ ಮಡಿವಂತರುಗಳು ಕೈಕೈ ಹಿಡಿದು ರಚಿಸಿದ ಚಕ್ರವ್ಯೂಹದ ನಡುವೆ ಕರೆದೊಯ್ಯಲಾಯಿತು.

ಸಾಕಷ್ಟು ಜನರಿಲ್ಲದೆ ಸಪ್ಪೆಯಾದ ಈ ಬಾರಿಯ ರಥೋತ್ಸವ ಭಯ ಆತಂಕಗಳೊಡನೆ ನಡೆಯುತ್ತಿದ್ದಾಗ ದಾರಿ ಮಧ್ಯದಲ್ಲಿ ಒಮ್ಮೆಲೇ ಜೋರಾಗಿ ಎಳೆದುದರಿಂದ ಸಮಾರಂಭದಲ್ಲಿ ಭಾಗವಹಿಸಿದ ಅನೇಕರು ಎದ್ದು ಬಿದ್ದು ಬರುವ ಪ್ರಸಂಗಗಳು ನಡೆದವು. ಅಂತೂ ಮಾಮೂಲಿ ತೆಗೆದುಕೊಳ್ಳುತ್ತಿದ್ದ ಸಮಯಕ್ಕಿಂತ ಕಡಿಮೆ ಸಮಯಲ್ಲಿ ರಥೋತ್ಸವ ಮುಗಿಯಿತು.

ಎರಡು ಮೂರು ದಿನಗಳಿಂದ ಎಲ್ಲರನ್ನೂ ಕಾಡುತ್ತಿದ್ದ (ಜೀವ) ಭಯದ ವಾತಾವರಣ ರಥೋತ್ಸವ ಮುಗಿಯುತ್ತಿದ್ದಂತೆ ತಿಳಿಯಾಯಿತು.

ಈ ಘಟನೆಗೆ ಪ್ರತಿಕ್ರಿಯಿಸಿದ ಗುರು ಒಬ್ಬರು "ನಮ್ಮ ಹಣೆಯಲ್ಲಿ ಬರೆದ ಹಾಗೆ ಆಗುತ್ತದೆ. ಈಶ್ವರನ ಇಚ್ಛೆ ಇದ್ದ ಹಾಗೆ ಆಗಲಿ" ಎಂದು ಪೋಲೀಸರಿಗೆ 'ನಿಮ್ಮ ಕೆಲಸ ನೀವು ಮಾಡಿ' ಎಂದರಂತೆ.

ಈ ಘಟನೆಯ ಹಿನ್ನಲೆಯಲ್ಲಿ, ಈವರಿಗೆ ಸ್ಥಳೀಯರನ್ನು ದೂರವಿಟ್ಟ ಮಠದ ಆಡಳಿತ ವ್ಯವಸ್ಥೆ, ಅದರಲ್ಲೂ ಬ್ರಾಹ್ಮಣೇತರರನ್ನು ಕೂಡಲೇ ಹತ್ತಿರಕ್ಕೆ ಕರೆದು, ಸಹಕಾರ ಕೋರಿ, ವಿಶೇಷ ಸಭೆ ನಡೆಸಿದ್ದು ಒಂದು ವಿಶೇಷವೆ. ಇದರಿಂದ ಉತ್ತೇಜಿತಗೊಂಡ ಭಕ್ತರೊಬ್ಬರು "ಏನೇ ಆಗಲಿ ಸ್ವಾಮಿ, ನಾವು ಹಳ್ಳಿಯಿಂದ 15 ಸಾವಿರ ಕೋವಿ ತರುತ್ತೇವೆ"ಂದು ಕೊಂಚ ಉದ್ರೇಕದಿಂದಲೇ ಹೇಳಿದರಂತೆ.

ಈ ಸಂದರ್ಭದಲ್ಲಿ "ಆಧುನಿಕ ಉಡುಪು (ಚೂಡಿದಾರ್, ಪ್ಯಾಂಟು ಇತ್ಯಾದಿ) ಧರಿಸಿದ ಯುವತಿಯರಿಗೆ "ತೀರ್ಥ ಪ್ರಸಾದ ಕೊಡಲಾಗುವುದಿಲ್ಲ" ಎಂದು ಧ್ವನಿವರ್ಧಕದಲ್ಲಿ ಘೋಷಿಸಲಾಯಿತು.

ಇಷ್ಟೆಲ್ಲ ಬಂದೊಬಸ್ತು ಇದ್ದಾಗ್ಯೂ ಈ ವರ್ಷ ಕೂಡ ರಥೋತ್ಸವದ ದಿನ ಮಠದಲ್ಲಿ ನಾಲ್ಕು ಜನ ಮಹಿಳೆಯರ ಮಾಂಗಲ್ಯವೇ ಅಲ್ಲದೆ ಇನ್ನು ಕೆಲವರ ಸರಗಳು ಮಾಯವಾದುದು ಈ ಬಾರಿಯ ಇನ್ನೊಂದು ವಿಶೇಷ.

ರಥೋತ್ಸವ ಮುಗಿದ ಕೂಡಲೆ ಬಂದೊಬಸ್ತನ್ನು ಸಡಿಲಿಸಿದ್ದರಿಂದ ಜನ "ಈ ವಿಷಯವೆಲ್ಲ ಸುಳ್ಳಿರಬೇಕು: ಇದು ಮಠದವರೇ ಏನೋ ಕಾರಣಕ್ಕೆ ಮಾಡಿದ್ದಿರಬೇಕು ಅಥವ ಅವರ ಉತ್ತುಂಗ ಭಕ್ತರ (ರಾಜ್ಯದ ಆಡಳಿತದ ಚುಕ್ಕಾಣಿ ಹಿಡಿದವರ) 'ಭಕ್ತಿ'ಯ ಪ್ರತೀಕವಾಗಿರಬೇಕು ಈ ಬಂದೊಬಸ್ತು" ಎಂದು ಹಗುರವಾಗಿ ಮಾತಾಡಿಕೊಳ್ಳುತ್ತಿದ್ದಾರೆ.

### ಕ್ಷೇತ್ರ ಜನತಾ ಕಾರ್ಯಕರ್ತರ ಸಮ್ಮೇಳನ ನ. 2ಕ್ಕೆ

ಕೊಪ್ಪ: ಶೃಂಗೇರಿ ಕ್ಷೇತ್ರ ಮಟ್ಟದ ಜನತಾ ಪಕ್ಷದ ಕಾರ್ಯಕರ್ತರ ಸಮ್ಮೇಳನ ಇಲ್ಲಿನ ಪುರಭವನದಲ್ಲಿ ನ. 2ರಂದು ನಡೆಯಲಿರುವುದಾಗಿ **ಶಾಸಕ ಗೋವಿಂದ** ಗೌಡರು ತಿಳಿಸಿದ್ದಾರೆ.

ಈ ಬಗ್ಗೆ ಅ. **21ರಂದು** ಪುರಭವನದಲ್ಲಿ ಕಾರ್ಯಕರ್ತರ **ಮತ್ತು** ವಿವಿಧ ಸಿದ್ಧತಾ ಸಮಿತಿಗಳ ಸಭೆ **ಕರೆದಿದ್ದು,** ಅವರೆಲ್ಲರೂ ಇದರಲ್ಲಿ ಹೆಚ್ಚಿನ **ಸಂಖ್ಯೆಯಲ್ಲಿ** ಭಾಗವಹಿಸಬೇಕೆಂದು ಕ್ಷೇತ್ರ **ಜನತಾ** ಅಧ್ಯಕ್ಷ ಮಿಾಗ ಚಂದ್ರಶೇಖರ್ **ಕೋರಿದ್ದಾರೆ.**

### ಅಡಿಕೆ ಬೇರು ತಿನ್ನುವ ಗೊಣ್ಣೆ ಹುಳು ಹತೋಟಿ ಬಗ್ಗೆ ತರಬೇತಿ ಶಿಬಿರ

ಶೃಂಗೇರಿ: ಇಲ್ಲಿನ ಶಾರದಾ ನಿಕೇತನದಲ್ಲಿ ದಿನಾಂಕ 27-10-86ನೇ ಸೋಮವಾರ ಬೆಳಿಗ್ಗೆ 10 ಗಂಟೆಗೆ "ಅಡಿಕೆ ಬೇರು ತಿನ್ನುವ ಗೊಣ್ಣೆ ಹುಳುವಿನ ಹತೋಟಿ" ಬಗ್ಗೆ ಒಂದು ದಿನದ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿದೆ. ಇದರಲ್ಲಿ ಕೃಷಿ ವಿಶ್ವವಿದ್ಯಾ ನಿಲಯದ ವಿಜ್ಞಾನಿಗಳು ಭಾಗವಹಿಸಲಿದ್ದಾರೆ. ಅಡಿಕೆ ಬೆಳೆಗಾರರೆಲ್ಲರೂ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಈ ಶಿಬಿರದ ಪ್ರಯೋಜನ ಪಡೆದುಕೊಳ್ಳಬೇಕಾಗಿ ಶೃಂಗೇರಿಯ ಕೃಷಿ ವಿಸ್ತರಣಾ ಮಾರ್ಗದರ್ಶಿ ಸಿ.ಕೆ. ಬಾಲಚಂದ್ರ ವಿನಂತಿಸಿದ್ದಾರೆ. ಶಿಬಿರಾರ್ಥಿಗಳಿಗೆ ಮಧ್ಯಾಹ್ನ ಭೋಜನದ ವ್ಯವಸ್ಥೆ ಮಾಡಲಾಗಿದೆ.

### ರೈತ ಮಹಿಳೆಯರಿಗಾಗಿ ಗೋಬರ್ ಗ್ಯಾಸ್ ತರಬೇತಿ

ಕೊಪ್ಪ: ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ವತಿಯಿಂದ ತಾ. ಪಂ. ಮಂಡಳಿ ಆಶ್ರಯದಲ್ಲಿ ಲಯನ್ಸ್ ಮತ್ತು ಕೃಷಿ ಇಲಾಖೆ ಸಹಯೋಗದೊಂದಿಗೆ ಗ್ರಾಮೀಣ ರೈತ ಮಹಿಳೆಯರಿಗಾಗಿ ಗೋಬರ್ ಗ್ಯಾಸ್ ಕುರಿತ ಮಾಹಿತಿ ಮತ್ತು ತರಬೇತಿ ಕಾರ್ಯಕ್ರಮವೊಂದು ಅ. 28ರಂದು ಬೆಳಿಗ್ಗೆ 11 ರಿಂದ 2 ಗಂಟೆಯವರೆಗೆ ಇಲ್ಲಿನ ಪುರಭವನದಲ್ಲಿ ನಡೆಯಲಿದೆ. ಗೋವಿಂದ ಗೌಡರು ಕಾರ್ಯಕ್ರಮ ಉದ್ಘಾಟಿಸುತ್ತಾರೆ ಗ್ರಾಮೀಣ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಇದರ ಸದುಪಯೋಗ ಪಡೆದುಕೊಳ್ಳಬೇಕೆಂದು ಕ್ಷೇತ್ರಾಭಿವೃದ್ಧಿ ಅಧಿಕಾರಿ ಪಿ. ಬಾಲಪ್ಪ ಕೋರಿದ್ದಾರೆ.

### ಕೊಪ್ಪ ತಾ॥ಗೆ ಇನ್ನೂ 3000 ಲೀಟರ್ ಪಾಮ್ ಎಣ್ಣೆ ಬಿಡುಗಡೆ

ಕೊಪ್ಪ: ಈ ತಾಲ್ಲೂಕಿಗೆ ಈ ತಿಂಗಳಲ್ಲಿ ಬಿಡುಗಡೆಯಾಗಿದ್ದ 9000 ಲೀ. ಪಾಮ್ ಎಣ್ಣೆಯಲ್ಲಿ 1 ಲೋಡಿಗಾಗುವಷ್ಟು – ಅಂದರೆ 6000 ಲೀ. ಗಳನ್ನು ಮಾತ್ರ – ತಾ.ವ್ಯ.ಮಾ.ಸ. ಸಂಘದವರು ತಂದಿದ್ದು, ಇನ್ನೊಂದು ಲೋಡು ಭರ್ತಿಯಾಗುವಸಲುವಾಗಿ ಇನ್ನೂ 3000 ಲೀ. ಗಳನ್ನು ಬಿಡುಗಡೆ ಮಾಡಲು ಜಿಲ್ಲಾಧಿಕಾರಿಗಳ ಆಹಾರ ಸಹಾಯಕರು ಒಪ್ಪಿರುವುದಾಗಿ ತಹಸೀಲ್ದಾರ್ ತಿಳಿಸಿದ್ದಾರೆ.

ಅಲ್ಲದೆ ಇನ್ನು ಮುಂದೆ ಪೂರ್ತಿ ಒಂದು ಟ್ಯಾಂಕರ್ ಎಣ್ಣೆಯನ್ನು ಅಂದರೆ ಸುಮಾರು ಹತ್ತರಿಂದ ಹತ್ತೂವರೆ ಸಾವಿರ ಲೀ. ಗಳಷ್ಟು ಪ್ರತಿ ತಿಂಗಳೂ ಬಿಡುಗಡೆ ಮಾಡಲೂ ಸಹ ಸಿದ್ಧವೆಂದು ಅವರು ತಿಳಿಸಿರುವುದಾಗಿಯೂ ತಹಸೀಲ್ದಾರ್ ತಿಳಿಸಿದ್ದಾರೆ.

ತಾ॥ನಲ್ಲಿ ಹಸಿರು ಮತ್ತು ಕೇಸರಿ ಕಾರ್ಡು ಸೇರಿ ಸುಮಾರು 17,000 ಕಾರ್ಡುಗಳಿದ್ದು ಪ್ರತಿ ಕಾರ್ಡಿಗೂ ತಿಂಗಳಿಗೆ 1 ಲೀಟರ್ ಆದರೂ ಕೊಡುವಂತೆ ಅಧಿಕಾರಿಗಳನ್ನು ಪುನಃ ಕೋರಿರುವುದಾಗಿ ಅವರು ತಿಳಿಸಿದ್ದಾರೆ.

**ಕೇಸರಿ ಕಾರ್ಡಿಗೆ ಅಕ್ಕಿ**

ತಾ॥ನ ಹಸಿರು ಕಾರ್ಡಿನವರಿಗೆ ಪ್ರತಿ ತಿಂಗಳೂ 10 ಕಿಲೋ ಅಕ್ಕಿ ಪೂರೈಸಲಾಗುತ್ತಿದ್ದು, ಕೇಸರಿ ಕಾರ್ಡಿನವರಿಗೆ ಮಾತ್ರ ಕೇವಲ 2–3 ಕಿಲೋ ಅಕ್ಕಿ ಸಿಗುತ್ತಿದೆ. ಈ ತೊಂದರೆ ನಿವಾರಿಸಲು ಮುಂದಿನ ತಿಂಗಳಿಂದ ಇನ್ನೂ 250 ಚೀಲ ಅಕ್ಕಿ ಕೊಡಲು ಆಹಾರ ಸಹಾಯಕರು ಒಪ್ಪಿರುವುದರಿಂದ ಕೇಸರಿ ಕಾರ್ಡಿನವರಿಗೂ 6ರಿಂದ 7 ಕಿಲೋ ಅಕ್ಕಿ ದೊರೆಯಲಿದೆ ಎಂದೂ ತಹಸೀಲ್ದಾರ್ 'ಮುಂಜಾವು'ಗೆ ತಿಳಿಸಿದ್ದಾರೆ.

### ಅ. 25ರಿಂದ 2 ಹೊತ್ತೂ ಹಾಲಿನ ವ್ಯಾನ್ ಸಂಚಾರ?

ಕೊಪ್ಪ: ಹಿಂದೆ 'ಹಾಲು' ಸಂಗ್ರಹಣಾ ಉಪ ಕೇಂದ್ರ'ವಾಗಿದ್ದು, ಈಚೆಗೆ ರಿಜಿಸ್ಟರ್ ಆಗಿರುವ ಸೋಮಲಾಪುರ ಹಾಲು ಉತ್ಪಾದಕರ ಸಹಕಾರ ಸಂಘದ ನೂತನ ಕಾರ್ಯಕಾರಿ ಸಮಿತಿ ಅ. 23ರಂದು ಅಧಿಕಾರ ವಹಿಸಿಕೊಳ್ಳಲಿದ್ದು, ಹಾಲು ಸಂಗ್ರಹಣೆಯ ಸ್ಥಳವೂ ಮೇಲಿನಪೇಟೆ ಗಣಪತಿ ದೇವಸ್ಥಾನದ ಎದುರಿನ ಕಟ್ಟಡಕ್ಕೆ ಸ್ಥಳಾಂತರಗೊಳ್ಳಲಿದೆ.ಅ. 25ರಿಂದ ಹಾಲು ಸಂಗ್ರಹಣೆಯ ವಾಹನ ಪ್ರತಿದಿನ 2 ಹೊತ್ತೂ ಓಡಾಡಲಿದೆ ಎಂದು ನಿರೀಕ್ಷಿಸಲಾಗಿದೆ.

### ಎಸ್ಪಿಗೆ ವರ್ಗಾ

ಚಿಕ್ಕಮಗಳೂರು : ಜಿಲ್ಲೆಗೆ ಪೋಲೀಸ್ ಮುಖ್ಯಾಧಿಕಾರಿಯಾಗಿ ಬಂದು ಕೆಲವೇ ತಿಂಗಳಾಗಿದ್ದರೂ ಸುಸಾಂತ್ ಮಹಾಪಾತ್ರ ಅವರಿಗೆ ತಮ್ಮ ಸ್ವಂತ ರಾಜ್ಯವಾದ ಒರಿಸ್ಸಾಕ್ಕೆ ವರ್ಗವಾಗಿದೆಯೆಂದು ವರದಿಯಾಗಿದೆ. ಈ ಅತ್ಯಲ್ಪ ಕಾಲದಲ್ಲೇ ಅವರು ಜಿಲ್ಲೆಯ ಪೋಲೀಸ್ ವ್ಯವಸ್ಥೆಯಲ್ಲಿ ಬಹಳಷ್ಟು ಬದಲಾವಣೆ ತಂದಿದ್ದರು. ಜಿಲ್ಲೆಗೆ ಬೇರೆ ಯಾರೂ ಇನ್ನೂ ನೇಮಕವಾದ ವರದಿಗಳಿಲ್ಲ.

### ಬಿ. ಎನ್. ಶಾಸ್ತ್ರಿ ನಿಧನ

ಕೊಪ್ಪ: ಇಲ್ಲಿನ ಶಾಸ್ತ್ರಿ ಕಾಫಿ ಬಾರ್ ಮಾಲೀಕರಾಗಿದ್ದ ಬಿ.ಎನ್. ಶಾಸ್ತ್ರಿಯವರು ಗುರುವಾರ(ಅ. 16ರಂದು) ನಿಧನರಾದರು. ಸುಮಾರು 40 ವರ್ಷಗಳಿಂದ ಇಲ್ಲಿ ಹೋಟೆಲ್ ನಡೆಸುತ್ತಿದ್ದ ಅವರು ಒಮ್ಮೆ ಪುರಸಭಾ ಸದಸ್ಯರೂ ಆಗಿದ್ದರು.

## 1990ರಿಂದ ರಬ್ಬರ್ ಬೆಳೆ ಸಹಾಯ ಧನ ನಿಲುಗಡೆ
# ಲಭ್ಯ ಭೂಮಿಯಲ್ಲಿ ರಬ್ಬರ್ ಬೆಳೆಯಲು ಕರೆ

ನರಸಿಂಹರಾಜಪುರ: ರಬ್ಬರ್ ಬೆಳೆಯಲು ಹೆಕ್ಟೇರಿಗೆ 5 ಸಾವಿರ ರೂ.ಗಳಂತೆ ಈಗ ನೀಡಲಾಗುತ್ತಿರುವ ಸಹಾಯಧನವನ್ನು 1990ರಲ್ಲಿ ನಿಲ್ಲಿಸಲು ಕೇಂದ್ರ ಸರ್ಕಾರ ಯೋಚಿಸಿದ್ದು, ಕರ್ನಾಟಕದ ರೈತರು ಇನ್ನು ಒಂದೆರಡು ವರ್ಷಗಳಲ್ಲಿ ತಮಗೆ ಲಭ್ಯವಿರುವ ಭೂಮಿಗಳಲ್ಲಿ ರಬ್ಬರ್ ಕೃಷಿ ಮಾಡಿ ಈ ಸಹಾಯ ಧನದ ಸವಲತ್ತು ಪಡೆಯುವಂತೆ ಇಲ್ಲಿ ಕರೆ ನೀಡಲಾಯಿತು.

ಇಲ್ಲಿನ ಭೂ ಅಭಿವೃದ್ಧಿ ಬ್ಯಾಂಕಿನ ಆಶ್ರಯದಲ್ಲಿ ಈಚೆಗೆ ನಡೆದ ರಬ್ಬರ್ ಬೆಳೆ ವಿಚಾರ ಸಂಕಿರಣದಲ್ಲಿ ಮಾತನಾಡಿದ ಮಂಗಳೂರು ಪ್ರಾದೇಶಿಕ ಕಚೇರಿಯ ರಬ್ಬರ್ ಉಪ ಅಭಿವೃದ್ಧಿ ಅಧಿಕಾರಿ ಕೆ. ಕೆ. ಪಾಲ್ ಈ ರೀತಿ ಕರೆ ನೀಡಿದರು. ಪ್ರಾರಂಭದಲ್ಲಿ ಶೇ. 80ರಷ್ಟು ಸಹಾಯಧನ ನೀಡಲಾಗುತ್ತಿತ್ತು. ಈಗ ಹೆಕ್ಟೇರಿಗೆ 5 ಸಾವಿರ ರೂ. ಸಹಾಯಧನವಲ್ಲದೆ ಬ್ಯಾಂಕುಗಳಿಂದ ಹೆಕ್ಟೇರಿಗೆ ಹದಿನೇಳೂವರೆ ಸಾವಿರ ರೂ. ಸಾಲ ದೊರಕುತ್ತಿದೆ ಎಂದು ಅವರು ಹೇಳಿದರು.

**ನೆಡುತೋಪಿಗಾಗಿ ಅರಣ್ಯ ನಾಶ : ಶಂಪಾ ಆತಂಕ**

ಸರ್ಕಾರವು ನೆಡುತೋಪುಗಳನ್ನು ಬೆಳೆಸುವ ನೆಪದಲ್ಲಿ ಬೃಹತ್ ಪ್ರಮಾಣದಲ್ಲಿ ಅರಣ್ಯಗಳನ್ನು ಕಡಿಸಿ ನಾಶ ಮಾಡುತ್ತಿರುವುದರಿಂದ ಪರಿಸರದ ಸಮತೋಲನ ತಪ್ಪುತ್ತಿದೆ. ಇದರಿಂದ ವರ್ಷೇ ವರ್ಷೇ ಮಳೆ ಕಮ್ಮಿಯಾಗುತ್ತಿದ್ದು, ಬರದ ಪರಿಸ್ಥಿತಿ ಪ್ರತಿ ವರ್ಷ ಹೆಚ್ಚುತ್ತಿದೆ ಎಂದು ಆತಂಕ ವ್ಯಕ್ತಪಡಿಸಿದ ಕರ್ನಾಟಕ ರಬ್ಬರು ಕೃಷಿಕರ ಸಂಘದ ಕಾರ್ಯದರ್ಶಿಗಳೂ ರಾಜ್ಯದ ಒಬ್ಬ ಪ್ರಮುಖ ಪರಿಸರ ಪ್ರೇಮಿ ಕಾರ್ಯಕರ್ತರೂ ಆಗಿರುವ ಮುಂಡಾಜೆಯ ಶಂಪಾ ದೈತೋಟ ಅವರು ಇನ್ನು ಮುಂದಾದರೂ ದಟ್ಟ ಅರಣ್ಯಗಳನ್ನು ಕಡಿಯದೆ ಹಾಗೇ ಉಳಿಸಬೇಕೆಂದು ಮನವಿ ಮಾಡಿದರು.

'ಸಿ ಮತ್ತು ಡಿ' ಎಂದು ವರ್ಗೀಕರಿಸಿರುವ ಭೂಮಿಗಳಲ್ಲಿ, ಬರಡು ಭೂಮಿಗಳಲ್ಲಿ ರಬ್ಬರನ್ನು ಸರ್ಕಾರದಿಂದಲೂ ಹಾಗೂ ನಿರುದ್ಯೋಗಿ ಯುವಕರಿಗೆ ತಲಾ 2 ಹೆಕ್ಟೇರುಗಳಷ್ಟು ಭೂಮಿಯನ್ನು ಗುತ್ತಿಗೆ ಅಥವಾ ದರಖಾಸ್ತಾಗಿ ನೀಡುವ ಮೂಲಕವೂ ಬೆಳೆಸಬೇಕೆಂದು ಅವರು ಒತ್ತಾಯಿಸಿದರು.

ಉಜಿರೆ ರಬ್ಬರ್ ಬೆಳೆಗಾರರ ಸಹಕಾರ ಸಂಘದ ಉಪಾಧ್ಯಕ್ಷ ಕೆ.ಎ. ಪಾಂಡಿ ಮತ್ತು ಕಾರ್ಯದರ್ಶಿ ಥಿಯೋಡೋರ್ ಮೇರಾನ್ ಮಾತನಾಡಿ, ರಬ್ಬರ್ ಬೆಳೆಯುವವರ ಪ್ರತ್ಯೇಕ ಸಹಕಾರ ಸಂಘದ ಸ್ಥಾಪನೆಯ ಅವಶ್ಯಕತೆಯನ್ನು ಒತ್ತಿ ಹೇಳಿದರು. ಅಧ್ಯಕ್ಷತೆ ವಹಿಸಿದ್ದ ಭೂ ಬ್ಯಾಂಕಿನ ಮಾಜಿ ಅಧ್ಯಕ್ಷ ಎಚ್. ಪಿ. ತಿಮ್ಮೇಗೌಡರು ನರಸಿಂಹರಾಜಪುರ ತಾ॥ನಲ್ಲಿ ರಬ್ಬರು ಬೆಳೆಯುವ ಪ್ರಯೋಜನ ಮತ್ತು ಅವಶ್ಯಕತೆಯನ್ನು ವಿವರಿಸಿದರು.

ಆರಂಭದಲ್ಲಿ ಬಿ. ಎಸ್. ವಿಠಲ ರಾವ್ ಪ್ರಾಸ್ತಾವಿಕವಾಗಿ ಮಾತನಾಡಿದರು. ಭೂ ಬ್ಯಾಂಕ್ ಕಾರ್ಯದರ್ಶಿ ಶಂತಕುಮಾರ್ ವಂದಿಸಿದರು.

ನ.ರಾ. ಪುರ ತಾಲ್ಲೂಕಿನ ರಬ್ಬರ್ ಬೆಳೆಗಾರರು ಸಭೆ ಸೇರಿ ರಬ್ಬರ್ ಮಾರಾಟ ಸಹಕಾರ ಸಂಘದ ಸ್ಥಾಪನೆಗಾಗಿ ಬಿ. ಎಸ್. ವಿಠಲರಾವ್ ಅವರನ್ನು ಮುಖ್ಯ ಪ್ರವರ್ತಕರನ್ನಾಗಿ ಆಯ್ಕೆ ಮಾಡಿ ಇದರ ಪರವಾಗಿ ರಬ್ಬರ್ ಸಂಗ್ರಹದ ಅಧಿಕಾರವನ್ನು 15 ಮಂದಿ ವರ್ತಕರನ್ನು ಆಯ್ಕೆ ಮಾಡಿ ಅವರಿಗೆ ವಹಿಸಲಾಯಿತು. ಸಹಕಾರ ಸಂಘಗಳ ಸ್ಥಳೀಯ ಅಧಿಕಾರಿ ಮಾದಪ್ಪ ಮಾರ್ಗದರ್ಶನ ಮಾಡಿದರು.

## ನೆರವು ನೀಡಿ

ಪ್ರಿಯರೆ,

ನನ್ನ ಪತಿಯಾದ ಅಚ್ಯುತ ನಾರಾಯಣ ಅವರು ಮೂತ್ರ ಪಿಂಡದ ಕಾಯಿಲೆಯಿಂದ ಬಳಲುತ್ತಿದ್ದಾರೆ. ಅವರು ಬೆಂಗಳೂರಿನ ಸೇವಾ ಕ್ಷೇತ್ರ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಪಡೆಯುತ್ತಿದ್ದಾರೆ. ನಿಯತಕಾಲಿಕವಾಗಿ ನಡೆಯಬೇಕಾದ ಡಯಾಲಿಸಿಸ್ ಚಿಕಿತ್ಸೆಗಾಗಿ ತಿಂಗಳಿಗೆ ಮೂರರಿಂದ 4 ಸಾವಿರ ರೂ.ಗಳ ವೆಚ್ಚ ತಗಲುತ್ತದೆ. ಬದಲಿ ಮೂತ್ರ ಪಿಂಡ ಜೋಡಿಸುವ ಶಸ್ತ್ರ ಚಿಕಿತ್ಸೆಗೆ ಸುಮಾರು 20 ಸಾವಿರ ರೂ.ಗಳ ವೆಚ್ಚ ತಗಲುತ್ತದೆ.

ನಾನು ಬಡ ಮಧ್ಯಮ ಕುಟುಂಬದಿಂದ ಬಂದವಳಾಗಿದ್ದು, ನನ್ನ ಪತಿಯ ಚಿಕಿತ್ಸೆಗೆ ಹಣ ಒದಗಿಸಲು ಅಶಕ್ತಳಾಗಿದ್ದೇನೆ.

ಆದ್ದರಿಂದ ಸಾರ್ವಜನಿಕರು ಮತ್ತು ವಾಚಕರು ನನ್ನ ನಿವೇದನೆಯನ್ನು ಸ್ವೀಕರಿಸಿ ನನ್ನ ಪತಿಯ ಚಿಕಿತ್ಸೆಗಾಗಿ ಧನ ಸಹಾಯವನ್ನು ಅಚ್ಯುತ ನಾರಾಯಣ, ಬಿ. ಕೆ. ಎಫ್. ಕಿಡ್ನಿ ಕೇಂದ್ರ, 27ನೇ ಅಡ್ಡ ರಸ್ತೆ, ಬನಶಂಕರಿ 2ನೇ ಹಂತ, ಬೆಂಗಳೂರು-560070 ಇಲ್ಲಿಗೆ ಕಳುಹಿಸಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

— ಕೆ. ಪಿ. ಆನಂದಲಕ್ಷ್ಮಿ,
ಕಿಗ್ಗ

## ಮೂಳೆ ಕ್ಷಯ : ಬಾಲಕಿಯ ಚಿಕಿತ್ಸೆಗೆ ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಹಣ

ಕೊಪ್ಪ : ಇಲ್ಲಿನ ಇಂದಿರಾ ನಗರದ ಶ್ರೀಮತಿ ಶಾರದಾ ಎಂಬವರ ಮಗಳು ರತ್ನಾವತಿ ಎಂಬ ಬಾಲಕಿಗೆ ಮೂಳೆಕ್ಷಯ ರೋಗ ಉಂಟಾಗಿದ್ದು, ಇದರ ಚಿಕಿತ್ಸೆಗಾಗಿ ಮುಖ್ಯ ಮಂತ್ರಿಗಳ ಪರಿಹಾರ ನಿಧಿಯಿಂದ ಮಂಜೂರಾಗಿರುವ 2.000 ರೂ.ಗಳ ಚೆಕ್ಕನ್ನು ಶಾಸಕ ಗೋವಿಂದ ಗೌಡರು ಅ. 18ರಂದು ಆಕೆಯ ಮನೆಗೆ ತೆರಳಿ ವಿತರಿಸಿದರು.

12 ವರ್ಷದ ರತ್ನಾವತಿ 7ನೇ ತರಗತಿಯಲ್ಲಿ ಓದುತ್ತಿದ್ದು, ಶೃಂಗೇರಿಯ ಧನ್ವಂತರಿ ಆಸ್ಪತ್ರೆಯ ಮೂಲಕ ಚಿಕಿತ್ಸೆ ಪಡೆಯುತ್ತಿದ್ದಾಳೆ. ಈ ಹಣವನ್ನು ಕೇವಲ 15-20 ದಿನಗಳ ಅಲ್ಪ ಕಾಲಾವಧಿಯಲ್ಲಿ ಕೊಡಿಸಿರುವುದಾಗಿ ಶಾಸಕರು ಈ ಸಂದರ್ಭದಲ್ಲಿ ತಿಳಿಸಿದರು.

## ಚಾವಲ್ಮನೆ ಮಂಡಲ ಪಂಚಾಯ್ತಿ ಕಾಂಗ್ರೆಸ್ ಕಮಿಟಿ

ಕಮ್ಮರಡಿ: ಹಾಲಿ ಚಾವಲ್ಮನೆ, ಹಾಲ್ಮುತ್ತೂರು ಮತ್ತು ಭಂಡಿಗಡಿ ಪಂಚಾಯ್ತಿಗಳನ್ನೊಳಗೊಂಡ ಚಾವಲ್ಮನೆ ಮಂಡಲ ಪಂಚಾಯ್ತಿ ಕಾಂಗ್ರೆಸ್ ಸಮಿತಿಗೆ ಕೊಪ್ಪ ಭೂ ಅಭಿವೃದ್ಧಿ ಬ್ಯಾಂಕಿನ ಮಾಜಿ ಅಧ್ಯಕ್ಷ ಹೊಸಗಾರು ಶಿವಪ್ಪ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದಾರೆ.

ಅ. 13ರಂದು ಬ್ಲಾಕ್ ಕಾಂಗ್ರೆಸ್ ಸಮಿತಿ ಅಧ್ಯಕ್ಷ ವಿಜಯ ಅಜಲರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕರ್ತರ ಸಭೆಯಲ್ಲಿ ಭಂಡಿಗಡಿ ಮಂಜುನಾಥ ಭಟ್ ಮತ್ತಿತರ 18 ಮಂದಿಯನ್ನು ಕಾರ್ಯಕಾರಿ ಸಮಿತಿಗೆ ಆರಿಸಲಾಯಿತು. ಸಭೆಯಲ್ಲಿ ಬಿ.ಜಿ. ಚಿದಂಬರ್, ಜಿ.ಎಸ್. ನಾಗೇಶ್, ಬಿ. ಜಿ. ಚಂದ್ರಶೇಖರ್, ಪರಮೇಶ್ವರ ಮುಂತಾದವರು ಮಾತನಾಡಿದರು.

# ವಿಶ್ವ ಆಹಾರ ದಿನಾಚರಣೆ

ಕೊಪ್ಪ : ಇಲ್ಲಿನ ಲಯನ್ಸ್ ಕ್ಲಬ್, ಕೃಷಿ ಇಲಾಖೆ, ಕಂದಾಯ ಇಲಾಖೆ ಮತ್ತು ತಾ. ಅ. ಮಂಡಳಿ ಇವುಗಳ ಸಂಯುಕ್ತ ಆಶ್ರಯದಲ್ಲಿ ಅ. 16ರಂದು ವಿಶ್ವ ಆಹಾರ ದಿನಾಚರಣೆಯನ್ನು ಆಚರಿಸಲಾಯಿತು. ಮನಮೋಹನ ಕಲ್ಲೆ ಅಧ್ಯಕ್ಷತೆ ವಹಿಸಿದ್ದರು. ಸಹಾಯಕ ಕೃಷಿ ನಿರ್ದೇಶಕ ಎಂ.ಎಸ್. ಸುಬ್ಬಯ್ಯ ಗೌಡರು ಈ ದಿನಾಚರಣೆಯ ಉದ್ದೇಶ ವಿವರಿಸಿದರು. ಕೊಪ್ಪ ವೈದ್ಯಾಧಿಕಾರಿಗಳಾದ ಡಾ॥ ಎಂ. ಜಿ. ಪ್ರಸಾದ್ ವಿಶ್ವ ಆಹಾರ ದಿನಾಚರಣೆಯ ಬಗ್ಗೆ ಮಾಹಿತಿ ನೀಡಿದರು. ಸಭೆಯಲ್ಲಿ ಈ ಕೆಳಕಂಡ ವಿಚಾರಗಳ ಬಗ್ಗೆ ಚರ್ಚಿಸಲಾಯಿತು: 1) ಅಧಿಕ ಆಹಾರ ಉತ್ಪಾದನೆ, ತಾಂತ್ರಿಕ ರೀತಿಯಲ್ಲಿ ದವಸ-ಧಾನ್ಯಗಳ ಸಂಗ್ರಹಣೆ ಮತ್ತು ಸಮರ್ಪಕ ವಿತರಣೆ, 2) ಪರಿಸರ ನೈರ್ಮಲ್ಯ ಕಾಪಾಡುವಿಕೆ, 3) ಕೃಷಿ ಅರಣ್ಯ ಅಭಿವೃದ್ಧಿ 4) ಪೌಷ್ಟಿಕ ಆಹಾರವನ್ನು ಸರಳ ರೀತಿಯಲ್ಲಿ ಉಪಯೋಗಿಸುವುದು, 5. ಧಾನ್ಯಶೇಖರಣೆಯಲ್ಲಿ ಮಹಿಳೆಯರ ಪಾತ್ರ, ಇತ್ಯಾದಿ.

ಶಿರೀಷ್ ಗುರ್ಜರ್, ರೋಹಿಣಿ ವೆಂಕಟೇಶ್ ಭಟ್, ಎಚ್.ಎಂ. ಮಲ್ಲಯ್ಯ ಮುಖ್ಯ ಅತಿಥಿಗಳಾಗಿದ್ದರು. ಎ. ಜಿ. ಸುಬ್ರಮಣ್ಯ ವಂದಿಸಿದರು.

## ಹರಿಹರಪುರ ವ್ಯ. ಸೇ. ಸ. ಸಂಘದ ಅಧ್ಯಕ್ಷರಾಗಿ ಹಚ್ಚಾರು ಮಂಜುನಾಥ್

ಹರಿಹರಪುರ : ಅ. 10ರಂದು ನಡೆದ ಇಲ್ಲಿನ ವ್ಯ. ಸೇ. ಸಹಕಾರ ಸಂಘದ ಅಧ್ಯಕ್ಷರ ಚುನಾವಣೆಯಲ್ಲಿ ಇಬ್ಬರು ಎಚ್. ಎಸ್. ಮಂಜುನಾಥರುಗಳಿಗೆ ಪ್ರಬಲ ಸ್ಪರ್ಧೆಯಿದ್ದು, ಕಡೆಯಲ್ಲಿ ಹಚ್ಚಾರು ಮಂಜುನಾಥ್ ಅವರು ಅಧ್ಯಕ್ಷರಾಗಿ ಜಯಶೀಲರಾಗಿದ್ದಾರೆಂದು ತಿಳಿದು ಬಂದಿದೆ.

## ಅಡಿಕೆ ಧಾರಣೆ

**ಶಿವಮೊಗ್ಗ ತಾ॥ 15.10.1986**

ಸರಕು: 2800 - 3510
ಬೆಟ್ಟೆ : 1661 - 2272
ಗೊರಬಲು: 500 - 1150

**ಸಾಗರ ತಾ॥ 15.10.86**

ಆಪಿ ರೂ. 3120 - 3800
ಚಾಲಿ: ರೂ. 1832 - 2169
ಸಿಪ್ಪೆ ಗೋಟು 650 - 850

## ಏಲಕ್ಕಿ ಧಾರಣೆ

**ಸಕಲೇಶಪುರ**

| ತಾರೀಕು | ಗರಿಷ್ಠ | ಸರಾಸರಿ |
|---|---|---|
| 6.10.86 | 226 | 153 |
| 7.10.86 | 229 | 160 |
| 8.10.86 | 226 | 125 |
| 9.10.86 | 232 | 149 |
| 10.10.86 | 218 | 162 |

**ಮಲೆನಾಡಿನ ಏಲಕ್ಕಿ (ಈ ವಾರ)**

140 - 160

**ಸಿರ್ಸಿ**

| | | |
|---|---|---|
| 8.10.86 | 205 | 115 |

## ಯಶಸ್ವಿ ಸೈಕಲ್ ಪ್ರವಾಸ : ಕೊಪ್ಪದ ಪ್ರವೀಣ್
# 'ಡಿಸ್ಕವರರ್ ಆಫ್ ಕರ್ನಾಟಕ'

ಕೊಪ್ಪ: ಇಲ್ಲಿನ ಪ್ರ. ದ. ಕಾಲೇಜು ವಿದ್ಯಾರ್ಥಿ ಪ್ರವೀಣ್ ಎಚ್. ನಾಯಕ್ ಸೈಕಲ್ ಮೇಲೆ 10 ದಿನಗಳ ಕಾಲ ದಕ್ಷಿಣ ಕರ್ನಾಟಕದ ಪ್ರವಾಸವನ್ನು ಯಶಸ್ವಿಯಾಗಿ ಮುಗಿಸಿದ್ದು, ಯೂತ್ ಹಾಸ್ಟೆಲ್ಸ್ ಅಸೋಸಿಯೇಶನ್ ಆಫ್ ಇಂಡಿಯಾದ ವತಿಯಿಂದ ಅವರಿಗೆ "ಡಿಸ್ಕವರರ್ ಆಫ್ ಕರ್ನಾಟಕ" ಎಂಬ ಪ್ರಶಸ್ತಿ ದಕ್ಕಿದೆ.

ಈ ವರ್ಷದ ಜೂನ್‌ನಲ್ಲೇ ತಮ್ಮ ಇಬ್ಬರು ಗೆಳೆಯರೊಂದಿಗೆ ಅವರು ಈ ಪ್ರವಾಸದ ಯೋಜನೆ ಹಾಕಿದ್ದು ಮಳೆಗಾಲ ಆರಂಭವಾದ್ದರಿಂದ ಮುಂದೂಡಿದ್ದರು. ಈಗ ಅಕ್ಟೋಬರ್ 7ರಿಂದ 10 ದಿನಗಳ ಕಾಲ ತಾವೊಬ್ಬರೇ ಪ್ರವಾಸ ಕೈಗೊಂಡು, ಚಿಕ್ಕಮಗಳೂರು, ಶಿವಮೊಗ್ಗ, ಹಾಸನ, ತುಮಕೂರು, ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಗಳನ್ನು ಬಳಸಿ, "ಡಿಸ್ಕವರರ್ ಆಫ್ ಕರ್ನಾಟಕ" ಪ್ರಶಸ್ತಿಯೊಂದಿಗೆ ವಾಪಸಾಗಿದ್ದಾರೆ.

ಪ್ರವೀಣ್ ಇಲ್ಲಿನ ಜನಪ್ರಿಯ ವಕೀಲರಾದ ಎಚ್.ಡಿ. ನಾಯಕ್ ಅವರ ಮಗ. ಅವರನ್ನು 'ಮುಂಜಾವು' ಹಾರ್ದಿಕವಾಗಿ ಅಭಿನಂದಿಸುತ್ತ ಇನ್ನೂ ಉತ್ತಮ ಸಾಧನೆಗಳನ್ನು ಮಾಡುವಂತೆ ಉತ್ತೇಜಿಸುತ್ತದೆ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ